

# ಕಲಿ ಕನ್ನಡ-೧

## ಪರಿಚಯ ಭಾಷೆ ಕನ್ನಡ ಪಠ್ಯಪುಸ್ತಕ

## ಒಂದನೆಯ ತರಗತಿ









೨೦೧೬





**ಕರ್ನಾಟಕ ಪಠ್ಯಪುಸ್ತಕ ಸಂಘ (ರಿ)**
ನಂ. ೪, ೧೦೦ ಅಡಿ ವರ್ತುಲ ರಸ್ತೆ, ಬನಶಂಕರಿ ೩ನೇ ಹಂತ
ಬೆಂಗಳೂರು-೫೬೦ ೦೮೫





## ಪಠ್ಯಪುಸ್ತಕ ರಚನಾ ಸಮಿತಿ

**ಅಧ್ಯಕ್ಷ**

**ಡಾ. ಸಿ. ಎಸ್. ರಾಮಚಂದ್ರ**
ಪ್ರವಾಚಕರು, ಕನ್ನಡ–ಭಾಷಾ ವಿಜ್ಞಾನ
ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ
ಮಾನಸಗಂಗೋತ್ರಿ, ಮೈಸೂರು – ೫೭೦ ೦೦೬

**ಸದಸ್ಯರು**

**ರಾಮಣ್ಣ ಹವಳೆ**
ನಿವೃತ್ತ ಉಪನ್ಯಾಸಕ
ನೀಲಕಂಠೇಶ್ವರ ನಗರ
ರಾಯಚೂರು – ೫೮೪ ೧೦೩

**ರಂಗಪ್ಪಯ್ಯ ಹೊಳ್ಳ**
ನಿವೃತ್ತ ಭಾಷಾ ಸಹಾಯಕ
ಶ್ರೀನಿವಾಸ, ಚಿತ್ರಪಾಡಿ
ಸಾಲಿಗ್ರಾಮ – ೫೭೬ ೨೨೫
ಉಡುಪಿ ಜಿಲ್ಲೆ

**ಎ. ಭುಜಂಗಾಚಾರ್**
ಕನ್ನಡ ಭಾಷಾ ಅಧ್ಯಾಪಕ
ಶ್ರೀ ಜ್ವಾಲಾಮಾಲಿನಿ ಬಾಲಿಕಾ ಪ್ರೌಢಶಾಲೆ
ನರಸಿಂಹರಾಜಪುರ – ೫೭೭ ೧೩೪
ಚಿಕ್ಕಮಗಳೂರು ಜಿಲ್ಲೆ

**ಮಹದೇವಯ್ಯ**
ಬಿ. ಆರ್. ಪಿ.
ಕ್ಷೇತ್ರ ಸಂಪನ್ಮೂಲ ಕೇಂದ್ರ
ಹೆಗ್ಗಡದೇವನಕೋಟೆ – ೫೭೧ ೧೨೧

**ಬೆಳವಾಡಿ ಮಂಜುನಾಥ**
ಕನ್ನಡ ಭಾಷಾ ಅಧ್ಯಾಪಕ
ಬಾಲಿಕಾ ಸರ್ಕಾರಿ ಪದವಿ ಪೂರ್ವ ಕಾಲೇಜು
ಮೂಡಿಗೆರೆ – ೫೭೭ ೧೩೨
ಚಿಕ್ಕಮಗಳೂರು ಜಿಲ್ಲೆ

**ಬಿ. ಬಾಲಕೃಷ್ಣಯ್ಯ**
ಕನ್ನಡ ಭಾಷಾ ಅಧ್ಯಾಪಕ
ಸರ್ಕಾರಿ ಪ್ರೌಢ ಶಾಲೆ
ದೇವಲಾಪುರ – ೫೭೦ ೦೩೧
ಮೈಸೂರು ಜಿಲ್ಲೆ

**ಎಚ್. ಎಸ್. ವಾಣಿ**
ಅಧ್ಯಾಪಕಿ
ಸರ್ಕಾರಿ ಪ್ರೌಢ ಶಾಲೆ
ಪಿ. ಹೆಚ್. ಕಾಲೋನಿ
ತುಮಕೂರು – ೫೭೨ ೧೦೧

**ಆರ್. ಡಿ. ರವೀಂದ್ರ**
ಸಹಶಿಕ್ಷಕ
ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ
ಬಾಳಗಡಿ – ೫೭೭ ೧೨೬
ಕೊಪ್ಪ ತಾಲ್ಲೂಕು
ಚಿಕ್ಕಮಗಳೂರು ಜಿಲ್ಲೆ

**ಸಂಯೋಜಕರು**

**ಉಷಾ ಬಿ. ಗಂಜೀಗಟ್ಟಿ**
ಹಿರಿಯ ಸಹಾಯಕ ನಿರ್ದೇಶಕರು
ಡಿ. ಎಸ್. ಇ. ಆರ್. ಟಿ.
ಬೆಂಗಳೂರು – ೫೬೦ ೦೮೫

**ಸಲಹೆ ಮತ್ತು ಮಾರ್ಗದರ್ಶನ**

**ಎಂ. ಎನ್. ಬೇಗ್**
ನಿರ್ದೇಶಕರು
ಡಿ. ಎಸ್. ಇ. ಆರ್. ಟಿ.
ಬೆಂಗಳೂರು – ೫೬೦ ೦೮೫



**ಚಿತ್ರರಚನೆ / ವಿನ್ಯಾಸ**

**ಬಾಗೂರು ಮಾರ್ಕಾಂಡೇಯ**



# ಮುನ್ನುಡಿ

೨೦೦೮-೨೦೦೯ ನೇ ಶೈಕ್ಷಣಿಕ ವರ್ಷದಿಂದ ಕರ್ನಾಟಕ ನಾಡಿನಾದ್ಯಂತ ಕನ್ನಡ ಮಾತೃಭಾಷೆ ಅಲ್ಲದವರಿಗೆ ಹಾಗೂ ಆಂಗ್ಲ ಮಾಧ್ಯಮ ಶಾಲೆಗಳಲ್ಲಿ ಒಂದನೇ ತರಗತಿಯಿಂದ ವ್ಯಾಸಂಗ ಮಾಡುತ್ತಿರುವವರಿಗೆ ಪರಿಚಯ ಭಾಷೆ ಕನ್ನಡವನ್ನು ಕಡ್ಡಾಯಗೊಳಿಸುವುದರ ಮೂಲಕ ಕಲಿಕೆ ಮತ್ತು ಕಲಿಸುವಿಕೆಗೆ ಅನುವಾಗುವಂತೆ ಭಾಷಾವೈಜ್ಞಾನಿಕ ನಿಟ್ಟಿನಲ್ಲಿ ವ್ಯವಸ್ಥಿತವಾಗಿ ಸಂರಚಿಸಿ ನಿಗದಿಪಡಿಸಿದ ಪಠ್ಯವೇ **ಕಲಿ** ಕನ್ನಡ-೧. ಪ್ರಸ್ತುತ ಪಠ್ಯಪುಸ್ತಕವನ್ನು ನುರಿತ ಭಾಷಾವಿಜ್ಞಾನಿಗಳು, ಶಿಕ್ಷಣ ತಜ್ಞರು ಮತ್ತು ತರಗತಿಯ ಅನುಭವೀ ಅಧ್ಯಾಪಕರನ್ನೊಳಗೊಂಡ ಸಮಿತಿ ಸಿದ್ಧಪಡಿಸಿದೆ. ಭಾಷಾ ಕಲಿಕೆಯಲ್ಲಿ ಮಕ್ಕಳು ಸಹಜ ಹಾಗೂ ಸಕ್ರಿಯವಾಗಿ ಭಾಗಿಯಾಗಿ ಕಲಿಕೆಯ ಸಾಮರ್ಥ್ಯಗಳನ್ನು ಪರಿಣಾಮಕಾರಿಯಾಗಿ ಹೆಚ್ಚಿಸಿಕೊಂಡು ಭಾಷಾ ಜ್ಞಾನವನ್ನು ಸದೃಢವಾಗಿ ಪಡೆದುಕೊಳ್ಳಬೇಕೆಂಬುದೇ ಪಠ್ಯದ ಮೂಲೋದ್ದೇಶ. ಕನ್ನಡ ಭಾಷೆ ಹಾಗೂ ನಾಡಿನ ಬಗೆಗೆ ಹೆಚ್ಚು ಅಭಿಮಾನ, ಆಸಕ್ತಿ, ಅಕ್ಕರೆಯನ್ನು ಬೆಳೆಸಿಕೊಳ್ಳಲು ಪಠ್ಯದಲ್ಲಿನ ಚಿತ್ರ ಪಾಠಗಳು ಅನುವಾಗಿವೆ. ಮಕ್ಕಳಲ್ಲಿ ಸೃಜನಶೀಲತೆಯನ್ನು ಮೂಡಿಸುವಲ್ಲಿ **ಕಲಿ** ಕನ್ನಡ – ೧ ಪಠ್ಯಪುಸ್ತಕ ಸೂಕ್ತವಾಗಿದೆ. ಮಾನವೀಯ ಮೌಲ್ಯಗಳನ್ನು ಸಮಾನಾಂತರ ಹಾಗೂ ಲಂಬ ಶ್ರೇಣಿಯಲ್ಲಿ ಕ್ರಿಯಾತ್ಮಕಗೊಳಿಸುವಲ್ಲಿ ಇಡೀ ಪಠ್ಯ ಸಮರ್ಪಕವಾಗಿದೆ. ಸಂತಸಭರಿತ ಕಲಿಕೆಯಲ್ಲಿ ಆಸಕ್ತಿ ವಿಶ್ವಾಸ, ನಂಬಿಕೆ ಮತ್ತು ಕುತೂಹಲವನ್ನು ಉಳಿಸಿಕೊಳ್ಳುವ ತಮ್ಮ ಸದಾಶಯ ಬಹುಮಟ್ಟಿಗೆ ಸಫಲತೆಯನ್ನು ಪಡೆದಿದೆ ಎಂಬುದು ನಮ್ಮ ನಮ್ರ ಭಾವ.

**ಪ್ರಕೃತ ಕಲಿ ಕನ್ನಡ-೧ :** ಪಠ್ಯ ರಚನಾ ಯೋಜನೆಯಲ್ಲಿ ಸಕ್ರಿಯವಾಗಿ ಭಾಗವಹಿಸಿ ಸಹಕರಿಸಿದ ಎಲ್ಲರಿಗೂ ಅಭಿಮಾನ ಪೂರ್ವಕ ವಂದನೆಗಳು. ಈ ಪಠ್ಯದ ಬಗ್ಗೆ ಬರುವ ಎಲ್ಲ ರೀತಿಯ ಪೂರಕ, ರಚನಾತ್ಮಕ, ಚಿಂತನಶೀಲ ಸಲಹೆ ಸೂಚನೆಗಳನ್ನು ನಿರ್ದೇಶನಾಲಯ ಸದಾ ಮುಕ್ತವಾಗಿ ಸ್ವಾಗತಿಸುತ್ತದೆ.

**ನಿರ್ದೇಶಕರು**

ಡಿ.ಎಸ್ **ಇ.ಆರ್**.ಟಿ. ಬೆಂಗಳೂರು – ೫೬೦ ೦೮೫.

# ಸಮಾಲೋಚನೆ

**ಆಧುನಿಕರಣ** ಮತ್ತು ಜಾಗತಿಕರಣಕ್ಕೆ ಹೊಂದಿಕೊಂಡಂತೆ ಅರಿವಿನ ಕ್ಷಿತಿಜವನ್ನು ಮಾರ್ಪಡಿಸಿಕೊಳ್ಳುತ್ತಾ ಬಹುಮುಖದಿ ವಿಸ್ತರಿಸಿಕೊಳ್ಳುವುದು ಅಗತ್ಯ ಹಾಗೂ ಅನಿವಾರ್ಯ. ಹೊಸಯುಗದ ಬಹುತೇಕ ಆಕಾಂಕ್ಷೆಗಳನ್ನು ಹೊತ್ತುತರುವ ಇತ್ತೀಚಿನ ಶೈಕ್ಷಣಿಕ ಸಂಶೋಧನೆಗಳನ್ನು ಮೈಗೂಡಿಸಿಕೊಂಡು ಹಂತಹಂತವಾಗಿ ಕಲಿಕಾ ಪ್ರಕ್ರಿಯೆ ನಡೆಯಬೇಕು. ಮಕ್ಕಳ ಗ್ರಹಿಕಾ ಸಾಮರ್ಥ್ಯ ಮತ್ತು ಮನೋಬಲಕ್ಕನುಸಾರ ಭಾಷೆ ಮತ್ತು ಕಲಿಕಾ ವಸ್ತು ವ್ಯವಸ್ಥಿತ ಸುಸಂಘಟಿತ ರೂಪದಲ್ಲಿ ಅನಾವರಣಗೊಳ್ಳುತ್ತಾ ದೊರಕಬೇಕು. ನಮ್ಮ ಪರಂಪರೆಯ ಸಂಸ್ಕೃತಿ ಮತ್ತು ಜೀವನ ಮೌಲ್ಯಗಳು ವೈಜ್ಞಾನಿಕ ಹಿನ್ನೆಲೆಯಲ್ಲಿ ದಿಗ್ದರ್ಶಿಸುವಂತಾದಾಗ ಕಲಿಕಾ ಪ್ರಕ್ರಿಯೆ ಸಾರ್ಥಕಗೊಳ್ಳುತ್ತದೆ. ಅದೇ ಇಂದಿನ ಕಲಿಕಾ ಶೈಕ್ಷಣಿಕತೆ.

**ಇತ್ತೀಚಿನ** ದಿನಗಳಲ್ಲಿ ಕರ್ನಾಟಕ ಸರ್ಕಾರ ಪ್ರಾಥಮಿಕ ಶಿಕ್ಷಣವನ್ನು ಸಾರ್ವತ್ರೀಕರಣಗೊಳಿಸಿ ಕಲಿಕೆ–ಕಲಿಸುವಿಕೆಯ ಗುಣಮಟ್ಟವನ್ನು ಸದೃಢಗೊಳಿಸಿ ಮೌಲೀಕರಿಸುವ ಉದ್ದೇಶದಿ ಕಲಿಕೆಯ ಕನಿಷ್ಠ ಮಟ್ಟಗಳ ಅನ್ವಯಾಧಾರದಿ ಶಾಲಾ ಪಠ್ಯಪುಸ್ತಕಗಳನ್ನು ಸಮರ್ಪಕ ರೀತ್ಯ ರಚಿಸಿ ನಿಗದಿಪಡಿಸಿರುವುದು ಸ್ತುತ್ಯಾರ್ಹ. ಇದು ಯಾವುದೇ ಆರೋಗ್ಯಕರ ಸಮಾಜದ ಸರ್ವಾಂಗೀಣತೆಯ ವಿಕಾಸತಾ ಫಲವೇ ಆಗಿದೆ. ಪ್ರಕೃತ ನೆಲೆಯಲ್ಲಿ ರೂಪುಗೊಳ್ಳುವ ಸಿದ್ಧತಾ ಶೈಕ್ಷಣಿಕ ಸತ್ವಯುತ ಯೋಜನೆ, ದಿಟ್ಟ ನಿಲುವು ಇಲ್ಲವೇ ನಡೆಸುವ ಸಾಮೂಹಿಕ ಪ್ರಯತ್ನಗಳು ಶ್ರೀಸಾಮಾನ್ಯರೆಲ್ಲರ ಅಭ್ಯುದಯದ ಆಶಯವಾಗಿದೆ. ನಿರಂತರ ವಸ್ತುನಿಷ್ಠ ಯತ್ನ, ಕ್ರಮಬದ್ಧ ನಿಯಮಾನುಸಾರ ಯೋಜನೆ, ಚೇತೋಹಾರಿ ನಿಶ್ಚಯ, ಪ್ರಸ್ತುತತೆ ಹಾಗೂ ಕಾಲಧರ್ಮ ಸಮನ್ವಯತೆಗೆ ಅನುವಾದ ವೈಜ್ಞಾನಿಕ ಶೈಕ್ಷಣಿಕ ವಿನ್ಯಾಸವೇ ವ್ಯಕ್ತಿತ್ವ ವಿಕಸನದ ಬಿಂಬ. ಇಂದು ಶಿಕ್ಷಣ ನಮ್ಮ ನಿಮ್ಮೆಲ್ಲರ ಯಶೋ ಸಿದ್ಧಿಯ ಮೆಟ್ಟಿಲು.

**ಭಾಷಾ** ಶಿಕ್ಷಣದ ವಿಚಾರದಲ್ಲಿನ ಗೊಂದಲಗಳನ್ನು ಭಾಷಾವೈಜ್ಞಾನಿಕ ಹಿನ್ನೆಲೆಯಲ್ಲಿ ನಿವಾರಿಸಿಕೊಂಡು ದೃಢಪಡಿಸುವುದು ಅಗತ್ಯ. ನಮ್ಮ ದೇಶದಲ್ಲಿರುವ ಬಹುಭಾಷಿಕ ವೈವಿಧ್ಯತೆ ಹಲವು ಸವಾಲುಗಳನ್ನು ಹುಟ್ಟುಹಾಕಿದರೂ ಅನೇಕ ಅವಕಾಶಗಳನ್ನೂ ಒದಗಿಸಿದೆ. ಬಹುಭಾಷಿಕ ಜ್ಞಾನ, ಅರಿವಿನ ಸಂವರ್ಧನೆ, ಸಾಮಾಜಿಕ ಸಹನೆ, ವೈವಿಧ್ಯಮಯ ಚಿಂತನೆ ಹಾಗೂ ವಿದ್ಯಾರ್ಜನೆಯಲ್ಲಿ ಹೆಚ್ಚಿನ ಸಾಧನೆಗೆ ಸಹಕಾರಿ ಎಂಬುದನ್ನು ಅನೇಕ ಅಧ್ಯಯನಗಳು ದೃಢಪಡಿಸಿವೆ.

**ಭಾಷಾಕಲಿಕೆ** ಹಾಗೂ ವ್ಯವಸ್ಥಿತ ಬಳಕೆ ನಾಡಿನ ಶೈಕ್ಷಣಿಕ, ಸಾಂಸ್ಕೃತಿಕ, ಸಾಹಿತ್ಯಕ, ಭಾಷಿಕ, ಐತಿಹಾಸಿಕ ಮತ್ತು ಸಾಂಪ್ರದಾಯಕ ಬದುಕಿನ ನಿಚ್ಚ ಪ್ರಮಾಣಗಳು. ಅವು ನಾಡಿನ ನಲ್ತನದ

ಸಮಗ್ರತೆಯನ್ನು ಪೋಷಿಸುವುದಲ್ಲದೇ ಸಂಭ್ರಮಿತವಾಗಿ ವ್ಯಾಪಕತ್ವಕ್ಕೆ ಇಂಬು ನೀಡುತ್ತವೆ. ಅದು ಸ್ವಭಾಷಾ ಕಲಿಕೆ ಮತ್ತು ಬಳಕೆಗೆ ಬಹು ಆಯಾಮವನ್ನು ಕಲ್ಪಿಸಿದಂತಾಗುವುದು. ವಾಸ್ತವಿಕ ನೆಲೆಯಲ್ಲಿ ಯಾವುದೇ ವಿಷಯದ ಕಲಿಕೆ ಮಾತೃಭಾಷೆ/ಪ್ರಥಮ ಭಾಷೆಯ ಮೂಲಕ ಸಾಧಿತವಾಗುವಂತೆ ಇತರ ಭಾಷಾ ಮಾಧ್ಯಮಗಳಿಂದ ಸಾಧ್ಯವಾಗದು. ಮಾತೃಭಾಷೆಯಲ್ಲಿ ಕಲಿಕಾ ಪ್ರಕ್ರಿಯೆ ನಿರಾತಂಕವಾಗಿ ಸಾಗುವುದಲ್ಲದೇ ಕಲಿಕೆಯ ಫಲಗಳು ಕೂಡ ನಿರೀಕ್ಷಿತ ಮಟ್ಟದಲ್ಲಿ ಸಾಧಿತವಾಗಬಲ್ಲದು. ಇದರೊಂದಿಗೆ ಪರಂಪರೆ, ಭಾಷಾಹಿರಿಮೆ ಮತ್ತು ಸಾಂಸ್ಕೃತಿಕ ಮೌಲ್ಯಗಳನ್ನು ಸಹಜವಾಗಿ ಅರಿಯಲು ಸಾಧ್ಯ. ಇದರಿಂದ ನಾಡು–ನುಡಿಯ ಬಗೆಗೆ ಅಭಿಮಾನ ಮೂಡುವುದರೊಂದಿಗೆ ಸರ್ವತೋಮುಖ ವ್ಯಕ್ತಿತ್ವ ವಿಕಾಸಕ್ಕೆ ಪ್ರೇರಕವಾಗಬಲ್ಲದು. ಸೌಂದರ್ಯಪ್ರಜ್ಞೆ, ಸೃಜನಾತ್ಮಕತೆ ಹೊರಹೊಮ್ಮಲು ಮಾತೃಭಾಷೆ ವಿಶೇಷ ಚೈತನ್ಯವನ್ನು ಒದಗಿಸುವುದು.

**ವ್ಯಕ್ತಿಯ** ಒಳಮನಸ್ಸಿನ ಭಾವ–ಪರಿಕಲ್ಪನೆ, ಅನ್ನಿಸುವಿಕೆ, ಆಲೋಚನೆ ಮತ್ತು ಮನೋವರ್ತನಾ ಭಾವಗಳನ್ನು ಅನುಮಿತ ರೀತಿಯಲ್ಲಿ ಧ್ವನಿ ಸಂಕೇತಗಳ ಮೂಲಕ ನಿಶ್ಚಿತವಾಗಿ ಸಂವಹಿಸುವ ವ್ಯವಸ್ಥಿತ ಬೌದ್ಧಿಕ ಸನ್ನೆಯೇ ಭಾಷೆ. ವ್ಯಕ್ತಿಯ ಜೀವನದಲ್ಲಿ ಅದರ ಕಲಿಕೆ, ಬಳಕೆ ಹಾಗೂ ಬೋಧನೆಗೆ ಗುರುತರ ಪ್ರತ್ಯೇಕ ಆಯಾಮವನ್ನು ಕಲ್ಪಿಸಿದಂತಿಲ್ಲ. ಭಾಷೆ ಆತನ ಜೀವಿತದೊಂದಿಗೆ ನೈಜತಾ ರೀತ್ಯ ಮಿಳಿತವಾದ ಸೃಜನಾತ್ಮಕ ಸೃಷ್ಟಿ. ಬದುಕಿನ ಎಲ್ಲ ರಂಗಗಳ ಸಾಫಲ್ಯ ಫಲಿತಕ್ಕೆ ಅಗತ್ಯ, ಅನಿವಾರ್ಯ. ಅದಕ್ಕೆ ಇರಬಹುದು ಇಂದಿನ ಶೈಕ್ಷಣಿಕ ರಂಗದಲ್ಲಿ ಸೂಕ್ತ ಸಮನ್ವಯ ರೀತಿಯ ಭಾಷಾ ಕಲಿಕೆ ಮತ್ತು ಬಳಕೆ ಅಗತ್ಯ. ಅದರಿಂದಲೇ ಭಾಷಾ ಶಿಕ್ಷಣ ಮಹತ್ವದ್ದಾಗಿದ್ದು ಪಠ್ಯ ಮತ್ತು ಬೋಧಕರ ಜವಾಬ್ದಾರಿ ಹೆಚ್ಚಿನದು.

**ಜೀವನ ಧರ್ಮ** ನಾಡಿನ ಒಪ್ಪಿತ ಪರಂಪರೆಯ ಚೈತನ್ಯ, ಸಮೂಹದ ಮೇಲ್ಮೆ, ಪ್ರಾದೇಶಿಕ ಮಹತ್ತು, ಐತಿಹಾಸಿಕ ಮೌಲ್ಯ ಮತ್ತು ಸಾಹಿತ್ಯಕ ಶಿಷ್ಟತೆಯನ್ನು ಜತನವಾಗಿ ಕಟ್ಟಿ ಮುಂದುವರೆಸುವುದು ಭಾಷೆ. ನಾಡು–ನುಡಿಯ ಪ್ರಗತಿ ನಿಚ್ಚಳವಾಗಿ ಸಿದ್ಧಿಸುವುದೇ ಭಾಷಾ ಕಲಿಸುವಿಕೆಯಿಂದ. ಇಲ್ಲಿ ಕಲಿಸುವವನ ಪೂರ್ಣ ಪ್ರಾಮಾಣಿಕ ಹೊಣೆಗಾರಿಕೆಯಲ್ಲದೇ ಖಚಿತ ಜವಾಬ್ದಾರಿಯ ಪರಿಪಾಲನೆಯೂ ಮುಖ್ಯ.

**ಸಂಕೀರ್ಣವಾದ** ಜೀವನ ವ್ಯವಸ್ಥೆಯಲ್ಲಿ ಪೂರ್ವಾಪರ ವಿದ್ಯಮಾನಗಳನ್ನು ಮಾಧ್ಯಮದ ಮೂಲಕ ಅರಿಯುವ ನಿಟ್ಟಿನಲ್ಲಿ ಪಠ್ಯಕ್ರಮ ಕಾಲಕಾಲಕ್ಕೆ ಪರಿಷ್ಕಾರಗೊಳ್ಳುವುದು ಅನಿವಾರ್ಯ. ಪ್ರಸ್ತುತ ಸನ್ನಿವೇಶವನ್ನಾಧರಿಸಿ ಮೌಲ್ಯಮಾಪನಕ್ಕೆ ಪೂರಕವಾದ ಪಠ್ಯಕ್ರಮ ಅಪೇಕ್ಷಣೀಯ. ಈ ಹಿನ್ನೆಲೆಯಲ್ಲಿ ರಾಷ್ಟ್ರೀಯ ಪಠ್ಯಕ್ರಮದ ಸ್ಥೂಲರೂಪವನ್ನು ಪಡೆದುಕೊಂಡು ಒಂದು ನೆಲೆಗಟ್ಟನ್ನು ರೂಪಿಸಿದೆ.

**ಸಾಮಾನ್ಯವಾಗಿ** ವಿಷಯ ಸಂವಹನಕ್ಕೆ ಭಾಷೆ ಮೂಲಭೂತ ಮಾಧ್ಯಮ. ಅದು ವ್ಯವಸ್ಥಿತ ರೂಪದಲ್ಲಿ ನಿರ್ವಹಣೆಗೊಂಡಾಗ ಮಕ್ಕಳ ಸಾಮರ್ಥ್ಯಕ್ಕನುಸಾರ ಸುಲಭ ರೀತಿಯಲ್ಲಿ ಕಲಿಕಾ ಪ್ರಕ್ರಿಯೆ ಸಾಗುತ್ತದೆ. ಭಾಷಾ ತಳಹದಿಯ ಮೇಲೆ ರೂಪಿತವಾದ, ಪ್ರಾದೇಶಿಕ ವೈವಿಧ್ಯತೆಯನ್ನು ಗಮನಿಸಿ, ಭಾಷಾ ಕೌಶಲಗಳನ್ನು ಪರಿಣಾಮಕಾರಿಯಾಗಿ ರೂಪಿಸಲು ಪಠ್ಯದಲ್ಲಿ ಪ್ರಯತ್ನಿಸಿದೆ. ಈ ನಿಟ್ಟಿನಲ್ಲಿ ಕಲಿಕೆಯ ನಿರೀಕ್ಷಿತ ಫಲಗಳನ್ನು ಗಣನೆಗೆ ತೆಗೆದುಕೊಂಡಿದೆ. ಭಾಷೆಯ ಪ್ರತಿಯೊಂದು ಚಟುವಟಿಕೆಯಲ್ಲಿ ಪರಂಪರೆ ಮತ್ತು ಸಂಸ್ಕೃತಿಯ ಜತೆಗೆ ಶೈಕ್ಷಣಿಕ ಆಡಳಿತ ವ್ಯವಸ್ಥೆಗೂ ಪೂರಕವಾಗುವಂತೆ ಮಾರ್ಗದರ್ಶಿ ಸೂತ್ರವನ್ನು ಅಳವಡಿಸಿದೆ. ನೂತನ ಆವಿಷ್ಕಾರ ಮತ್ತು ಬದಲಾವಣೆಯನ್ನು ನಿರೀಕ್ಷಿತ ಫಲಗಳ ಹಿನ್ನೆಲೆಯಲ್ಲಿ ಸೇರಿಸಿಕೊಳ್ಳಲು ಅನುವು ಮಾಡಿಕೊಟ್ಟಿದೆ.

**ಮಗುವಿನ** ಶೈಕ್ಷಣಿಕ ಜೀವನದ ಅವಿಭಾಜ್ಯ ಅಂಗವೇ ಭಾಷಾ ಸಂಪನ್ನತೆ. ಸರ್ವಾಂಗೀಣ ಬೆಳವಣಿಗೆ, ಭಾಷಾ ಕಲಿಕೆ ಮತ್ತು ಬಳಕೆಯಿಂದಲೇ ಎಂಬುದು ಸತ್ಯ. ಮಗುವಿನ ವಯಸ್ಸು, ಮಾನಸಿಕ ಬೆಳವಣಿಗೆ ಹಾಗೂ ಸಾಂಸ್ಕೃತಿಕ ನೆಲೆಗೆ ಅನುವಾಗುವಂತೆ ಭಾಷಿಕ ಕಲಿಕಾ ಪೂರಕ ವಿಷಯವನ್ನು ಗಂಭೀರವಾಗಿ ಪರಿಗಣಿಸಿ ಕನ್ನಡ ಭಾಷಾ ಕಲಿಕೆಯ ಜತೆಯಲ್ಲೇ ಪರೋಕ್ಷವಾಗಿ ಪರಿಚಯಿಸಿ ಉದ್ದೀಪನಗೊಳಿಸುವ ಉದ್ದೇಶದಿಂದ, ಪ್ರಸ್ತುತ ಕನ್ನಡ ಪಠ್ಯ ಪುಸ್ತಕಗಳು ಪರಿಷ್ಕಾರಗೊಂಡು ರಚನೆಯಾಗಿವೆ. ಕನ್ನಡ ತಾಯಿಮಾತು ಅಲ್ಲದವರಿಗೆ ಕನ್ನಡ ಭಾಷೆಯನ್ನು ಕಲಿಸಲು ಪರಿಚಯಾತ್ಮಕ ನೆಲೆಯಿಂದ ಸಿದ್ಧಪಡಿಸಿರುವ ಪ್ರಾಯೋಗಿಕ ಕಲಿಕಾ ಪಠ್ಯವೇ **ಕಲಿ** ಕನ್ನಡ-೧ (ಪರಿಚಯ ಭಾಷೆ ಕನ್ನಡ). ಪ್ರಚಲಿತ ಶಿಕ್ಷಣದ ತಾತ್ವಿಕ ಸಿದ್ಧಾಂತ ವೈಜ್ಞಾನಿಕ ಭಾಷಾ ಬೋಧನಾ ಮರ್ಮ ಮತ್ತು ಕಲಿಕಾ ತತ್ತ್ವಗಳ ಅವತರಣಿಕೆ ಪ್ರಸ್ತುತ ಪಠ್ಯದ ಆಶಯ ಧಾತು. ಇದರಿಂದ ಭಾಷಾ ಕಲಿಕೆಯ ಮೂಲೋದ್ದೇಶವಾದ ಭಾಷಾ ಗ್ರಹಣ, ಗ್ರಹಿಕೆ, ವಿಷಯ ಪರಿಕಲ್ಪನೆ, ಅಭಿವ್ಯಕ್ತಿ, ಗುರುತಿಸುವಿಕೆ, ತಾತ್ವಿಕ ನಿರ್ಣಾಯಕತೆ, ಖಚಿತ ಮನನ, ಓದುವ ಮತ್ತು ಬರಹದ ಕೌಶಲಗಳನ್ನು ಔಪಚಾರಿಕಗೊಳಿಸುವ ನಿಟ್ಟಿನ ಪಠ್ಯವಿದು.

**ಪಠ್ಯಪುಸ್ತಕಗಳ** ನಿರ್ಮಾಣ ವಿನ್ಯಾಸ, ಸಾರ ಮೌಲಿಕತೆ ಹಾಗೂ ಸಾಹಿತ್ಯ ಸಾಂಸ್ಕೃತಿಕತೆ ಆಯಾ ನಾಡಿನ ಸಾಮಾನ್ಯ ಜನತೆಯ ಜೀವನಪರಿಯನ್ನು ಆಧರಿಸಿರುತ್ತದೆ. ಆಯಾ ಹೊತ್ತಿನ ಸಾಮಾಜಿಕರ ನೈತಿಕ ಮೌಲ್ಯಗಳೇ ಅನುಕರಣೀಯ ಹಾಗೂ ಅನುಸರಣೀಯ. ನಿಗದಿತ ಮೌಲ್ಯಾಂಶಗಳನ್ನು ಸಾಕ್ಷೀಕರಿಸುವ ಶೈಕ್ಷಣಿಕ ಭೂಮಿಕೆ ಇದು. ಕಲಿಕೆ, ಬೋಧನೆಯ ಕೈದೀವಿಗೆ. ಮಕ್ಕಳ ಮನೋವಿಕಸನಕ್ಕೆ ಸಮನ್ವಯಿತ ತಾಣ. ನಾಡಿನ ಸಾಂಸ್ಕೃತಿಕ ಭ್ರೌವ್ಯತೆ, ಭಾಷಿಕ ಮೌಲಿಕತೆ ಹಾಗೂ ಜನಪರ ನಂಬಿಕೆಯನ್ನು ಮೂರ್ತಗೊಳಿಸುವ ಮಾಧ್ಯಮವಿದು.

**ಕಲಿ ಕನ್ನಡ-೧** ಔಪಚಾರಿಕ ವಲಯದ ಪರಿಚಯ ಭಾಷೆ ಕನ್ನಡದ ಪಠ್ಯ. ಕನ್ನಡ ಪರಿಸರದಲ್ಲಿ ಕನ್ನಡ ಮಾಧ್ಯಮದಲ್ಲಿ ಓದದವರಿಗೆ ಅಂದರೆ ಕನ್ನಡ ಪ್ರಥಮ / ಮಾತೃಭಾಷೆ ಅಲ್ಲದವರಿಗೆ ಕನ್ನಡ

ಭಾಷೆಯನ್ನು ಸಹಜ ರೀತಿಯಲ್ಲಿ ಕಲಿಸುವ ಕಲಿಕಾ ಕನಿಷ್ಠ ಸಾಮರ್ಥ್ಯಗಳನ್ನು ಕ್ಷೇತ್ರಾನ್ವಯ ಸಮನ್ವಯಿಸಿ ವೈಜ್ಞಾನಿಕವಾಗಿ ರಚಿಸಿದ ಪಠ್ಯ. ಮಕ್ಕಳಲ್ಲಿ ಮೌಲ್ಯವರ್ಧನೆ, ಭಾಷಿಕ ಕೌಶಲಗಳ ಕ್ರಮವರಿತ ಪ್ರಭುತ್ವ, ಕಲಿಕಾ ಕೌತುಕತೆ, ಸೃಜನಶೀಲ ಕ್ರಿಯಾತ್ಮಕತೆ, ಉಲ್ಲಾಸದಾಯಕ ಚಟುವಟಿಕೆ ಹಾಗೂ ಬೌದ್ಧಿಕ ಚಾಣಾಕ್ಷ ಕಸರತ್ತುಗಳ ಸಮೀಕರಣ ಇಲ್ಲಿನ ಮೂಲೋದ್ದೇಶ. ಮಕ್ಕಳ ಮುಕ್ತ ಕಲಿಕಾ ಮನೋವರ್ತನೆಗೆ ಅವಕಾಶ ನೀಡಿ ಸ್ವಕಲಿಕಾ ರಂಜನೆಗೆ ಪೂರಕ ಪಾಠಗಳನ್ನು ನಿಯೋಜಿಸಿದೆ. ಕರ್ನಾಟಕದಲ್ಲಿನ ಭಿನ್ನ ಮಾತೃಭಾಷಿಕರ ಹಾಗೂ ಆಂಗ್ಲ ಮಾಧ್ಯಮಿಗಳ ಶಾಲಾ ನೆಲೆಯಲ್ಲಿ ತ್ರಿಭಾಷಾ ಸೂತ್ರದನ್ವಯ ಶೈಕ್ಷಣಿಕ ಭಾಷೆಯಾಗಿ ಕನ್ನಡವನ್ನು ಒಂದನೆಯ ತರಗತಿಯಿಂದಲೇ ಪರಿಚಯಿಸುತ್ತಾ ಕಲಿಸುವ ತೀರ್ಮಾನ ನಿರ್ಧಾರದ ಫಲವಿದು. ಮಾತೃಭಾಷಾ / ಪ್ರಥಮಭಾಷಾ ಮೂಲಕದ ಕಲಿಕೆಗೆ ಯಾವುದೇ ತೆರನಾದ ಅಡಚಣೆ ಆಗದ ರೀತಿಯಲ್ಲಿ ಪರಿಚಯ ಭಾಷೆ ಕನ್ನಡ ಕಲಿಕೆಯ ಆಯೋಜನೆ ಇಲ್ಲಿನದು.

**ಕಲಿ ಕನ್ನಡ-೧** ಪಠ್ಯ ಸಂರಚನಾ ಅವತರಣಿಕೆ ಮೂಲಭೂತ ಭಾಷಾ ಕಲಿಕಾ ಕೌಶಲಗಳ ತಾಂತ್ರಿಕತೆ ಹಾಗೂ ಭಾಷಾವೈಜ್ಞಾನಿಕ ವಿನ್ಯಾಸ ವಿನೂತತೆಯನ್ನು ಆಧರಿಸಿದೆ. ಮುಖ್ಯವಾಗಿ ಆಲಿಕೆ, ಪರಿಕಲ್ಪಿತ ವಿಷಯದ ಅರಿವು, ಭಾವಾರ್ಥ ಅಭಿವ್ಯಕ್ತಿ ಗುರುತಿಸಿ– ತಿಳಿ, ಅನುಕರಣ ನಿರಂತತೆ, ಪ್ರಾಯೋಗಿಕ ಅನ್ವಯಿಕಾ ಪರಿಚಯ ಭಾಷಾ ಕಲಿಕಾ ಮೆಟ್ಟಿಲುಗಳು. ಪ್ರಸ್ತುತ **ಕಲಿ** ಕನ್ನಡ–೧ ಪಠ್ಯಪುಸ್ತಕದ ನಿರೂಪಣಾ ವಿವರಣಾತ್ಮಕ ಕಲಿಕಾ ಅನುಕ್ರಮಣಿಕೆ ಇಂತಿದೆ :

- ಘಟಕ – ೦೧ ಚಿತ್ರ ಗುರುತಿಸಿ
- ಘಟಕ – ೦೨ ನೋಡಿ – ಕಲಿ
- ಘಟಕ – ೦೩ ಘಟನಾ ಚಿತ್ರಗಳು
- ಘಟಕ – ೦೪ ಚಿತ್ರಕತೆ
- ಘಟಕ – ೦೫ ಮಾಡಿ – ಕಲಿ
- ಘಟಕ – ೦೬ ಚಿತ್ರ ಸಂಭಾಷಣೆ
- ಘಟಕ – ೦೭ ಕಲಿ – ನಲಿ

– ಇವೆಲ್ಲವೂ ಕಲಿಕಾ ಕ್ರಿಯಾತ್ಮಕತೆಯ ಪ್ರಣಾಳಿಕೆಗಳು.

**ಕಲಿಕಾ** ಭಾಷೆಯ ಧ್ವನಿ ಉತ್ಪಾದನಾ ಅರಿವು ಹಾಗೂ ಖಚಿತತೆಗೆ ಸಾಕ್ಷಿ ಚಿತ್ರ ಗುರುತಿಸಿ ಭಾಗ. ಕಲಿಕಾರ್ಥಿ ಸ್ವಪ್ರಯತ್ನದಿ ಧ್ವನಿ ಉಚ್ಚಾರಣೆಯನ್ನು ಕ್ರಮೇಣ ಔಪಚಾರಿಕ ನೆಲೆಗೆ ತರುವ ಗುರಿ ಇಲ್ಲಿನದು. ಚಿತ್ರ ನೋಡಿದ ಕೂಡಲೇ ತನ್ನರಿವಿನ ಭಾವಾಭಿವ್ಯಕ್ತಿ ಸಹಜೋಚ್ಚಾರಣೆ ಮುಖ್ಯವೇ ಹೊರತು, ತರಬೇತು ಮುಖೇನ ಬಲವಂತಿಕೆಯ ಧ್ವನಿ ಉಚ್ಚಾರಣೆ ಸಲ್ಲದು. ಅದು ಕಲಿಕೆಯ ಕೃತಕತೆ. ಮಕ್ಕಳಿಗೆ ಉಚ್ಚಾರಣಾ ಮುಕ್ತತೆಗೆ ಅವಕಾಶ ನೀಡಿ, ನಿಧಾನವಾಗಿ ನೈಜ ಉಚ್ಚಾರಣಾ ವಲಯಕ್ಕೆ ಒಗ್ಗಿಸಬೇಕು. ಅದಕ್ಕೆ ಪೂರಕ ಭಾಗವಿದು. ಕನ್ನಡ ಧ್ವನಿಗಳ ಉಚ್ಚಾರಣಾತ್ಮಕತೆಯನ್ನು ಸ್ಥಿರೀಕರಿಸಿ ಕ್ರಮಾನುಗತಗೊಳಿಸುವ ಹಿನ್ನೆಲೆ ಇಲ್ಲಿನದು. ಧ್ವನಿಗೆ ಹೆಚ್ಚು ಪ್ರಾಧಾನ್ಯ.

**ಘಟಕ** - ೦೨ ನೋಡಿ - ಕಲಿ ಭಾಗದಲ್ಲಿ ಪರಿಚಿತ ಪ್ರಾಣಿ, ಪಕ್ಷಿ, ಹೂವು, ಹಣ್ಣು, ತರಕಾರಿ, ಆಟಿಕೆ, ವಸ್ತು, ವಾಹನ, ಬಣ್ಣ ಕಲಿಕಾ ನಮೂದುಗಳು. ಇದರ ಮೂಲೋದ್ದೇಶ ಮಗುವಿನ ಪರಿಚಿತ ವಲಯದ ಪೂರ್ವಭಾವೀ ಗ್ರಹಿಕೆ ಮತ್ತು ಅರ್ಥೈಸಿ ಅಭಿವ್ಯಕ್ತಿ, ಮಗುವಿನ ಆರಂಭದ ಮಾತನಾಡುವಿಕೆ ತನ್ನೀ ಭಾಷೆಯದ್ದಾಗಿದ್ದು; ಅದನ್ನು ಮಗುವಿನ ಅಭಿವ್ಯಕ್ತಿ ಭಾವಕ್ಕೆ ಮುಜುಗರವಾಗದ ರೀತಿ ಕಲಿಕಾ ಭಾಷಾ ವಾತಾವರಣಕ್ಕೆ ತರುವ ಪ್ರಾಮಾಣಿಕ ಯತ್ನ ಇಲ್ಲಿನದು. ಮಗುವಿನ ನಿರ್ಣಾಯಕಕ್ಕೆ ಸಿಂಧುತ್ವ ಅಗತ್ಯವಿದ್ದು ಅದಕ್ಕೆ ಆದ್ಯತೆ ನೀಡುವ ಪರಿ ಗಮನಾರ್ಹ. ಅದಕ್ಕಾಗಿ ಪರಿಚಿತ ಚಿತ್ರಗಳ ಸ್ವಚಟುವಟಿಕಾ ವಿವರ ನೆಲೆ ಅರ್ಥಪೂರ್ಣವಾಗಿದೆ. ಇದು ಮಕ್ಕಳಲ್ಲಿ ಸ್ವಗ್ರಹಿಕೆ, ಸ್ವ ಅನುಭವ ಹಾಗೂ ಸ್ವ ಅಭಿವ್ಯಕ್ತಿಯನ್ನು ಸಂಪನ್ನಗೊಳಿಸುವುದು.

**ಘಟಕ** - ೦೩ ಘಟನಾ ಚಿತ್ರಗಳು ಭಾಗದಲ್ಲಿ ಚಿತ್ರಗಳ ಮೂಲಕ ಘಟನೆಯೊಂದರ ವಿವರಣಾತ್ಮಕತೆಯನ್ನು ನೀಡಿದೆ. ಇಲ್ಲಿ ಮುಖ್ಯವಾಗಿ ಸರಳ ಪರಿಚಿತ ಕೌತುಕ ಘಟನೆಗಳ ಚಿತ್ರಸರಣಿಯನ್ನು ಅರ್ಥೈಸುವ ಸಲುವಾಗಿ ಸಂಯೋಜಿತ ಚಿತ್ರಗಳ ಭಾಗವಿದು. ಕೌತುಕತೆಯಿಂದ ಕಲ್ಪನಾ ಶಕ್ತಿಯ ಆಯಾಮದ ನೆಲೆಗಳ ಅನುಕ್ರಮಣಿಕೆ ಇಲ್ಲಿನದು. ಸಹಜ ಘಟನೆ ಕಲ್ಪನಾ ವ್ಯಾಪ್ತಿಯನ್ನು ವಾಸ್ತವಿಕಗೊಳಿಸುವುದು ಇವುಗಳಲ್ಲಿನ ಆಶಯ ದನಿ. ಅಲ್ಲದೇ ಘಟನಾ ಸಂದರ್ಭದ ಪರಿವಿನ್ಯಾಸ ಭಾಷಾ ಗ್ರಹಿಕೆಗೆ ಅಗತ್ಯವಾಗಿರುವುದರಿಂದ ಘಟನಾ ಚಿತ್ರಗಳ ಅನುಕ್ರಮಣಿಕೆ ಸಮರ್ಪಕ. ಮಕ್ಕಳಲ್ಲಿ ಅಂತರ್ಗತವಾಗಿರುವ ಕಲ್ಪಿತತೆಗೆ ಅಭಿವ್ಯಕ್ತಿ ಸ್ವರೂಪವನ್ನು ಮಾತನಾಡುವ ಪರಿಯಲ್ಲಿ ಹೆಚ್ಚಿಸಲು ಅನುವಾಗುವ ಭಾಗವಿದು.

**ಘಟಕ** - ೦೪ ಚಿತ್ರಕತೆ : ಇಲ್ಲಿ ಚಿತ್ರ ಮುಖೇನ ಮೌಲಿಕ ತಿರುಳಿನ ನೀತಿಯುಕ್ತ ವಿಚಾರಗಳನ್ನು ಕತೆಯೋಪಾದಿಯಲ್ಲಿ ನಿರೂಪಿಸಿದೆ. ನಮೂದಿತ ಕಥಾ ಚಿತ್ರಸರಣಿಯಲ್ಲಿ ನಿಶ್ಚಿತ ಕಥೆಯ ವಿವರವನ್ನು ಬಣ್ಣಯುಕ್ತ ಚಿತ್ರಗಳು ಮಗುವಿನ ಮನಸ್ಸಿನಲ್ಲಿ ಮೂಡಿಸುತ್ತವೆ. ಇದರಿಂದ ಅರಿತ ಕಥೆಯನ್ನು ಚಾಣಾಕ್ಷ ರೀತ್ಯ ಸರಾಗವಾಗಿ ಹೇಳಲು ಸಹಾಯಕವಾಗುವುದು. ಮಾತನಾಡುವಿಕೆಯ ರೀತಿ ರಿವಾಜನ್ನು ಮಗು

ಚಿತ್ರಕಥಾ ಸರಣಿಯಿಂದ ಕಲಿಯುವುದು. ಜತೆಗೆ ಸರಣಿಯುಕ್ತ ಗುರುತಿಸುವಿಕೆ ಸ್ಪಷ್ಟ ಆಡುವಿಕೆಗೆ ಆಧಾರ ಸಾಕ್ಷಿ. ಮಗು ಚಿತ್ರಸರಣಿಯಲ್ಲಿ ಅಡಗಿರುವ ಸಂವಹನಾಂಶಗಳನ್ನು ಯುಕ್ತರೀತಿಯಲ್ಲಿ ಅರ್ಜಿಸಿ ಭಾವನಾ ರೂಪದಲ್ಲಿ ಹೊರಹೊಮ್ಮಿಸಲು ಇವೆಲ್ಲವೂ ಪೂರಕವಾಗಿವೆ.

**ಘಟಕ - ೦೫** ಮಾಡಿ - ಕಲಿ : ಮಗು ಕುತೂಹಲದಿ ನಮೂದಿಸಿರುವ ಚಟುವಟಿಕೆಯನ್ನು ಗಂಭೀರವಾಗಿ ಗಮನಿಸಿ ಕಲ್ಪಿತ ಕ್ರಿಯಾತ್ಮಕತೆಗೆ ಅವಕಾಶ ಇಲ್ಲಿದೆ. ಸ್ವ ಆಲೋಚನೆಯಿಂದ ಮಕ್ಕಳು ಮಾಡಬಹುದಾದ ಸೃಜನಾತ್ಮಕ ಚಟುವಟಿಕಾ ಭಾಗವಿದು. ಕಲಿಕೆಗೆ ಖಚಿತತೆಯನ್ನು ಸಮನ್ವಯಗೊಳಿಸುವ ಹಲವಾರು ಚಟುವಟಿಕೆಗಳ ಅನುಸಂಧಾನತೆ ಇಲ್ಲಿದೆ. ಹಾಗಾಗಿ ಚಿತ್ರ ಕೌತುಕತೆ ಮುಂದುವರಿದು ಭಾವ ಸಂರಚನಾ ಹಂತಕ್ಕೆ ವ್ಯಾಪಿಸಿದೆ. ನಿರ್ವಹಿತ ಚಟುವಟಿಕೆ ಮಗುವಿನ ಭಾವ ವಿಸ್ತಾರಕ್ಕೆ ಸದೃಶವಾಗಿದೆ. ಪ್ರಾಯೋಗಿಕತ್ವ ಭಾವ ಪರಿಕಲ್ಪನೆಗೆ ಹೊಂದಿಕೊಂಡಿದೆ.

**ಘಟಕ - ೦೬** ಚಿತ್ರ ಸಂಭಾಷಣೆ : ಇಲ್ಲಿ ಮಗು ನಿಧಾನವಾಗಿ ಸಂಭಾಷಣೆಯ ಪರಿಯನ್ನು ಚಿತ್ರಗಳ ಮುಖೇನ ಚಟುವಟಿಕೆಯಿಂದ ಮನನ ಮಾಡಿಕೊಳ್ಳುವುದು. ನಮೂದಿತ ಸಂಭಾಷಣಾ ಚಿತ್ರಗಳು ಘಟನಾ ಸನ್ನಿವೇಶವನ್ನು ಆಧರಿಸಿದ್ದು ಸರಳತೆಯಿಂದ ಸಂವಹನ ಕ್ರಿಯೆಗೆ ಇಂಬು ನೀಡಿದೆ. ಅದರಿಂದ ಮಗು ಬಹು ಸುಲಭವಾಗಿ ಸಂದರ್ಭಕ್ಕೆ ತಕ್ಕಂತೆ ಪ್ರತಿಕ್ರಿಯಿಸುವ ಪ್ರಜ್ಞೆಯನ್ನು ಬೆಳೆಸಿಕೊಳ್ಳಲು ಅನುವಾಗುವುದು, ಸಮರ್ಥ ಮಾತುಗಾರಿಕೆಯೇ ಇಲ್ಲಿನ ಮೂಲಾಶಯ. ಹೆಚ್ಚಿನ ಆದ್ಯತೆಯೊಂದಿಗೆ ಪರಿಚಿತ ವಲಯದ ಸಂಬಂಧಿ ಚಿತ್ರಗಳ ಹೆಣಿಕೆ, ಕಲ್ಪನಾ ಶಕ್ತಿ ಹಾಗೂ ಅಭಿವ್ಯಕ್ತಿ ಮುಕ್ತತೆಗೆ ಅನುವಾಗಿದೆ.

**ಘಟಕ - ೦೭** ಕಲಿ - ನಲಿ : ಪ್ರಾಯೋಗಿಕ ಕ್ರಿಯಾತ್ಮಕ ಚಟುವಟಿಕಾ ನೆಲೆ. ಮಗುವಿನ ಮುಕ್ತ ಸ್ವಾತಂತ್ರ್ಯಕ್ಕೆ ಒತ್ತುಕೊಟ್ಟ ಕಲಿಕಾ ಉದ್ದೇಶ ಇಲ್ಲಿದೆ. ಸೃಜನಶೀಲತೆ, ಅನುಕರಣೆ, ನಿರ್ಣಾಯಕತೆ, ಹೊಂದಾಣಿಕೆ, ಅನ್ವಯಿಕ ಪ್ರಾಯೋಗಿಕತೆಯನ್ನು ಮಕ್ಕಳಲ್ಲಿ ಬೆಳೆಸುವುದೇ ಇದರ ಗುರಿ. ಸರಳತೆಯಿಂದ ಕ್ಲಿಷ್ಟತೆ, ಪರಿಚಿತದಿಂದ ಅಪರಿಚಿತತೆ, ಸುಲಭತೆಯಿಂದ ಸಂಕೀರ್ಣತೆಯೇ ಇಲ್ಲಿನ ಕಲಿಕಾ ಅನುಕ್ರಮಣಿಕೆ.

**ಸ್ವಚ್ಛಂದತೆಯ** ಹಿನ್ನೆಲೆಯೇ ಪರಿಚಯ ಭಾಷೆ ಕನ್ನಡದ ಕಲಿಕಾ ನಿರ್ಬಂಧ. ಪರಿಚಿತ ಭಾಷೆಯಾಗಿ ಕನ್ನಡದ ಮೂಲಭೂತ ಕಲಿಕಾ ಕೌಶಲಗಳನ್ನು ಭಾಷಾವೈಜ್ಞಾನಿಕ ಪರಿಧಿಯಲ್ಲಿ ಸೂತ್ರೀಕರಿಸಿದ ನಿಯೋಜನೆಯೇ ಇದರ ಆಂತರ್ಯದ ಗುಟ್ಟು. ಅನ್ಯ ಭಾಷಿಕರಿಗೆ ಇಲ್ಲವೇ ಇಂಗ್ಲೀಷ್ ಮಾಧ್ಯಮ ಶಾಲೆಗಳಲ್ಲಿ ಓದುತ್ತಿರುವ ಮಕ್ಕಳಿಗೆ ಕನ್ನಡವನ್ನು ಕಡ್ಡಾಯವಾಗಿ ಕಲಿಸುವ ಸಲುವಾಗಿ ಯೋಜಿತವಾದ ಚಿತ್ರ ಸಹಿತ ಶಾಲಾ ಪಠ್ಯವೇ ಕಲಿ ಕನ್ನಡ–೧. ಇದರಲ್ಲಿ ನೀಡಿರುವ ಕಲಿಕೋದ್ದೇಶದ ಚಿತ್ರ, ಚಿತ್ರಸರಣಿ, ಚಿತ್ರ ಸಂಯೋಜನಾ ಗುಚ್ಛವೇ ಪರಿಚಿತ ಭಾಷೆ ಕನ್ನಡದ ಕಲಿಸುವಿಕೆಯ ಅಂತಿಮ

ನೆಲೆಗಳೆಂದು ಭಾವಿಸದೆ ಶಿಕ್ಷಕ / ಶಿಕ್ಷಕಿಯರು ಬಹು ಆಯಾಮಗಳಲ್ಲಿರುವ ಅಗತ್ಯತೆ, ಸೂಕ್ತ ಮಾಹಿತಿ ಹಾಗೂ ವಿಧಾನಗಳನ್ನು ಬಳಸಿ ವ್ಯವಸ್ಥಿತವಾಗಿ ಸಂತಸಭರಿತ ರೀತಿಯಲ್ಲಿ ಕಲಿಸಲೆಂಬುದೇ ದೃಢಭಾವ.

**ಪರಿಚಯ ಭಾಷೆ ಕನ್ನಡ ಪಠ್ಯ ಕಲಿ ಕನ್ನಡ - ೧** ಪುಸ್ತಕದ ಸಂಯೋಜನಾ ಕಾರ್ಯದಲ್ಲಿ ಸಕ್ರಿಯವಾಗಿ ಭಾಗವಹಿಸಿ ನೆರವಾದ ರಚನಾ ಸಮಿತಿಯ ಎಲ್ಲಾ ಸನ್ಮಿತ್ರ ಬೋಧಕ ಸದಸ್ಯರ ಸಹಕಾರ, ಬೆಂಬಲ, ಆತ್ಮೀಯತೆ, ವಿಶ್ವಾಸ, ಹೃದಯಶ್ರೀಮಂತಿಕೆಯನ್ನು ಗೌರವದಿ ನೆನೆಯುವೆ. ಪಠ್ಯಪುಸ್ತಕ ನಿರ್ದೇಶನಾಲಯದ ನಿರ್ದೇಶಕರು, ಸಹನಿರ್ದೇಶಕರು, ಉಪನಿರ್ದೇಶಕರು ಹಾಗೂ ಹಿರಿಯ ಸಹಾಯಕ ನಿರ್ದೇಶಕರು ನಮ್ಮೀ ಕೆಲಸ ಕಾರ್ಯಗಳನ್ನು ಅಭಿಮಾನದಿ ವಿಚಾರಿಸುತ್ತಾ ಸಲಹೆ ಸೂಚನೆಗಳನ್ನು ಇತ್ತು ಸಹಾನುಭೂತಿಯಿಂದ ಕೆಲಸವನ್ನು ಸಮ್ಮತಿಸಿ ಪಠ್ಯ ಸಂರಚನಾ ಯೋಜನೆಯ ಯಶಸ್ಸಿಗೆ ಸಹಕರಿಸಿದ ಅವರೆಲ್ಲರಿಗೂ ಸಮಿತಿಯ ಪರವಾಗಿ ಗೌರವಪೂರ್ವಕ ವಂದನೆಗಳು. ಪ್ರಸ್ತುತ ಪಠ್ಯದ ಜೀವಂತಿಕೆಯೇ ಚಿತ್ರ. ಸೂಕ್ತ ಚಿತ್ರಗಳನ್ನು ಕುಂಚಿಸಿದ ಕಲಾವಿದರಿಗೂ ಪ್ರತ್ಯಕ್ಷ ಪರೋಕ್ಷವಾಗಿ ಸಹಕರಿಸಿದ ನಿರ್ದೇಶನಾಲಯ ಹಾಗೂ ಕನ್ನಡ ಸಂಘದ ಸನ್ಮಿತ್ರರಿಗೂ ಆದರಣೀಯಪೂರ್ವಕ ನಮಸ್ಕಾರಗಳು.



**ಸಿ. ಎಸ್. ರಾಮಚಂದ್ರ**
ಅಧ್ಯಕ್ಷ
**ಕಲಿ** ಕನ್ನಡ – ೧ ಪಠ್ಯಪುಸ್ತಕ ರಚನಾ ಸಮಿತಿ.





# ಕಲಿ ಕನ್ನಡದ ಒಳಗೇನಿದೆ ?

## ಕಲಿಕಾ ಅನುಕ್ರಮಣಿಕೆ

ಪುಟ ಸಂಖ್ಯೆ







ಚಿತ್ರ ಸರಣಿ-04

# ಬಲೆಗೆ ಬಿದ್ದ ಚಿರತೆ









(ಘಟಕ - 04)

ಚಿತ್ರ ಕಥಾ ಸರಣಿ-01

# ಒಗ್ಗಟ್ಟಿನಲ್ಲಿ ಬಲವಿದೆ

ಚಿತ್ರ ಕಥೆ









# ಏಡಿ ಮತ್ತು ಕೊಕ್ಕರೆ









ಚಟುವಟಿಕೆ-02

## ಮಂಗ ಮತ್ತು ಟೋಪಿ



ಚಟುವಟಿಕೆ-03

# ತೋಳ ಮತ್ತು ಮೇಕೆಮರಿಗಳು



# ಇಣಚಿ ಪರಿಚಯ



## ಇಣಚಿ ಪರಿಚಯ



ಚಟುವಟಿಕೆ-03

# ಧ್ವನಿ ಅನುಕರಣೆ









